# ಕಾನನ

## ನಿಸರ್ಗದೆಡೆಗೆ ಪಯಣ



ಮುಖಪುಟ

ಆಭರಣ ಜೇಡ

ಸೆಪ್ಟೆಂಬರ್ 2018

WCG
Wildlife Conservation Group



## ಲೇಖನಗಳು




**ವಿನ್ಯಾಸ**
ಅಶ್ವಥ .ಕೆ .ಎನ್

**ಮುಖಪುಟ ಛಾಯಾಚಿತ್ರ**
ಸುಮುಖ ಜಾವಗಲ್ ಎನ್.

**ಪರಿಷ್ಕರಣೆ**
ಮುರಳಿ .ಎಸ್
ಅನನ್ಯರೂಪ

**ಕರಡು ತಿದ್ದುಪಡಿ**
ಡಾ.ದೀಪಕ್ .ಬಿ, ಮೈಸೂರು

# ಬೆಲ್ ಮಿಮೋಸ

**ಸಾಮಾನ್ಯ ಹೆಸರು: Sicklebush**

**ವೈಜ್ಞಾನಿಕ ಹೆಸರು: *Dichrostachys cinerea***



© ಡಬ್ಲ್ಯೂ ಸಿ ಜಿ ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ಇದರ ಮೂಲ ಆಫ್ರಿಕ. ಇದು ಭಾರತದ ಉಪಖಂಡ, ಉತ್ತರ ಆಸ್ಟ್ರೇಲಿಯಾಗಳಲ್ಲಿ ಕಂಡು ಬರುತ್ತದೆ. ಕೆರಿಬಿಯನ್ ಮತ್ತು ಆಗ್ನೇಯ ಏಷ್ಯಾದ ಭಾಗಗಳಿಗೆ ಪರಿಚಯಿಸಲ್ಪಟ್ಟಿದೆ. ಬಳ್ಳಾರಿ, ತುಮಕೂರು, ಹಾಸನ, ಮೈಸೂರುಗಳಂತಹ ಶುಷ್ಕ ಮತ್ತು ಅರೆ ಶುಷ್ಕ ಎಲೆ ಉದುರುವ ಪ್ರದೇಶಗಳಲ್ಲಿ ಇವು ಬೆಳೆಯುತ್ತವೆ. **ಬೆಲ್ ಮಿಮೋಸ** ಮುಳ್ಳಿನ ಪೊದೆಯಂತೆ ಸುಮಾರು ಏಳು ಮೀಟರ್ ಎತ್ತರದವರಿಗೆ ಬೆಳೆಯುತ್ತದೆ. ಇದರ ತೊಗಟೆ ಹಸಿರು ಮಿಶ್ರಿತ ಬೂದು ಬಣ್ಣದ್ದು, ಸಿಲಿಂಡರಾಕಾರದ ಹೂವಿನ ಮೇಲ್ಭಾಗ ಕೆಂಪು ಮತ್ತು ತುದಿ ಭಾಗದಲ್ಲಿ ಹಳದಿ ಇದ್ದು ಆರರಿಂದ ಎಂಟು ಸೆಂಟಿಮೀಟರ್ ಉದ್ದದ ಪರಿಮಳಯುಕ್ತ ಹೂಗಳು ಬಿಡುತ್ತವೆ. ಇವು ಮೇ-ಸೆಪ್ಟೆಂಬರ್ ತಿಂಗಳುಗಳಲ್ಲಿ ಹೂವು ಮತ್ತು ಹಣ್ಣುಗಳನ್ನು ಬಿಡುತ್ತವೆ. ಈ ಸಸ್ಯದ ಎಲೆ, ಚಿಗುರು, ಹೂವು, ಹಣ್ಣು ಮತ್ತು ಬೀಜಗಳು ಜಾನುವಾರುಗಳಿಗೆ, ಕಾಡುಎಮ್ಮೆ, ಜಿರಾಫೆ, ಜಿಂಕೆ ಹೀಗೆ ಹಲವಾರು ಪ್ರಾಣಿಗಳಿಗೆ ಆಹಾರವಾಗಿದೆ. ಇದೊಂದು ಸಾಂಪ್ರದಾಯಿಕ ಔಷಧಿಯ ಸಸ್ಯ. ಇದರ ತೊಗಟೆ, ಬೇರು ಮತ್ತು ಎಲೆಗಳಿಂದ ತಲೆನೋವು, ಹಲ್ಲುನೋವು, ಭೇದಿ, ಕುಷ್ಠರೋಗ, ಕೆಮ್ಮು, ಮೂಳೆಯ ಮುರಿತವನ್ನು ಗುಣಪಡಿಸಲು ಮತ್ತು ಮೂತ್ರವರ್ಧಕವಾಗಿಯೂ ಸಹ ಬಳಸಲಾಗುತ್ತದೆ.




# ಹಳ್ಳಿಗಳ ಹೃದಯ ಮತ್ತು ನರನಾಡಿಗಳ ಮಿಡಿತ (ಸಂಕಟ)

"ಜೀವಜಲ, ನೀ ಯಾರೀಗೂ ಕಡಿಮೆಯಿಲ್ಲ ಬಲಾಬಲ".

ನೀರು ಎಂಬುದು ಸಕಲ ಜೀವರಾಶಿಗಳಿಗೂ ಬೇಕಾಗಿರುವ ಒಂದು ಅಗತ್ಯ ವಸ್ತು. ಜಲವು ದೇಹಕ್ಕೆ, ದೇಶಕ್ಕೆ ಹಾಗೂ ಭೂಮಂಡಲಕ್ಕೆ ಬಲ. ನೀರು ಉತ್ಪಾದನೆ ಮಾಡುವ ಸರಕಲ್ಲ. ಆದರೆ ಇದನ್ನು ಮಾನವ ಮಾರಾಟದ ಸರಕನ್ನಾಗಿಸಿಕೊಂಡಿರುವುದು ನಮಗೆಲ್ಲ ತಿಳಿದ ವಿಪರ್ಯಾಸದ ವಿಷಯ. ಒಬ್ಬ ಕವಿ ಹೇಳಿದಂತೆ "ನೀರೆಂಬುದು ಬಯಸಿದಾಗಲೆಲ್ಲಾ ಸಿಗುವ ಮಾಯ ವಸ್ತು ಅಲ್ಲಾ". ಆದರೂ ನೀರಿನ ದುರ್ಬಳಕೆಯೇನೂ ಕಡಿಮೆಯಾಗಿಲ್ಲ. ಭೂಮಿ ರಚನೆಯಾದಾಗಿನಿಂದಲೂ ನೀರು ಭೂತಾಯಿಯನ್ನು ತಬ್ಬಿಕೊಂಡಂತಿದೆ. ನಾಗರೀಕತೆಗಳು ಹುಟ್ಟಿದ್ದು ನದಿ ದಡಗಳಲ್ಲಿ (ನೀರಿನ ತಟಗಳಲ್ಲಿ), ಅದೇ ನಾಗರೀಕತೆಯು ಇಂದಿನ ನದಿಗಳ ಅವನತಿಗೆ ಶಾಪವಾಗಿರುವುದು ದುರಂತ .

ಪ್ರಸ್ತುತ ಜಗತ್ತಿನಲ್ಲಿ ಅನೇಕ ನದಿಗಳು, ಹಳ್ಳಗಳು ಬತ್ತಿಹೋಗುತ್ತಿರುವುದು ಭವಿಷ್ಯತ್ತಿನ ಪ್ರಪಂಚದ ಭಯಾನಕತೆಯನ್ನು ಆಹ್ವಾನಿಸುವಂತಿದೆ. ನಗರ ಪ್ರದೇಶಗಳಲ್ಲಿ ಅಭಿವೃದ್ಧಿಯ ಹೆಸರಿನಲ್ಲಿ ಕೆರೆಗಳನ್ನು ದುರಾಸೆಯಿಂದ ಅಕ್ರಮವಾಗಿ ಬಳಸಿಕೊಂಡಿದ್ದು, ಆಕ್ರಮಿಸಿಕೊಳ್ಳದೆ ಉಳಿದ ಕೆರೆಗಳು ತ್ಯಾಜ್ಯ ಸಂಗ್ರಹಾಲಯಗಳಾಗಿವೆ. ನಗರಗಳ ಪಕ್ಕದಲ್ಲಿ ಹರಿಯುತ್ತಿದ್ದ ನದಿಗಳು-ಹಳ್ಳಗಳು ಕಾಣೆಯಾಗಿ ದೊಡ್ಡ ದೊಡ್ಡ ಚರಂಡಿಗಳಾಗಿರುವುದು ಮತ್ತು ಆಗುತ್ತಿರುವುದು ನಮಗೆಲ್ಲಾ ಗೊತ್ತಿದೆ. ಆದರೂ ಗೊತ್ತಿಲ್ಲದಂತೆ ಉದಾಸೀನರಾಗಿದ್ದೇವೆ. ನಗರಗಳಲ್ಲಿ ಕೆರೆಗಳನ್ನು ಮುಚ್ಚಿ ಉದ್ಯಾನ ಮಾಡುವುದು, ಆಟದ ಮೈದಾನಗಳನ್ನು ಮುಚ್ಚಿ ಅಪಾರ್ಟ್‌ಮೆಂಟ್ ಕಟ್ಟುತ್ತಿರುವುದರಿಂದ ಅವುಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿರುವುದು ಶೋಚನೀಯ ಸಂಗತಿ.

ಇನ್ನು ಈ ಸ್ಥಿತಿ ಕೇವಲ ನಗರಗಳಿಗೆ ಮಾತ್ರ ಸೀಮಿತವಾಗಿಲ್ಲ. ಹಳ್ಳಿಗಳಲ್ಲೂ ಸಹ ಕೆರೆಗಳ, ತೊರೆಗಳ ಅತಿಕ್ರಮಣ ನಡೆಯುತ್ತಿವೆ. ಗ್ರಾಮೀಣ ಪ್ರದೇಶಗಳಲ್ಲಿ ಕೃಷಿ ಮೂಲ ಕಸುಬಾಗಿದ್ದು, ಕೃಷಿಯ ಸಂತುಷ್ಟಿಗೆ ಬೇಕಿರುವುದು ಜಲ ಮೂಲಗಳು. ಸಣ್ಣ ಸಣ್ಣ ಹಳ್ಳಗಳು ಸೇರಿ ನದಿಗಳಾಗುತ್ತಾ, ಕೃಷಿಗೆ ನೀರನ್ನು ಪೂರೈಸಿ ಸಾಗರವನ್ನು ಸೇರಿಕೊಳ್ಳುತ್ತಿದ್ದ ಹಳ್ಳಗಳು ಇಂದು ಬರೀ ಬೆಳ್ಳಗೆ ಹೊಳೆಯುವ ಕಲ್ಲುಗಳಿಂದ ತುಂಬಿಹೋಗಿವೆ. ಹಳ್ಳಗಳು ಇದ್ದರೂ ಅವುಗಳಿಗೆ ಜೀವವಿಲ್ಲದಂತಾಗಿವೆ. ಮರಳು ಗಣಿಗಾರಿಕೆ, ಒತ್ತುವರಿಗಳು, ನೀರಿನ ಅತೀ ಬಳಕೆಯ ಸ್ವಾರ್ಥಗಳಿಂದ ಹಳ್ಳಗಳು ದಿನೇ ದಿನೇ ತಮ್ಮ ಅಸ್ಥಿತ್ವವನ್ನು ಕಳೆದುಕೊಳ್ಳುತ್ತಿರುವುದು ಶೋಚನೀಯ ಮತ್ತು ದುಃಖಕರ ಸಂಗತಿ.



ಹಳ್ಳ, ತೊರೆಗಳು ನಮ್ಮ ದೇಹದ ರಕ್ತನಾಳಗಳಿದ್ದಂತೆ, ಕೆರೆಗಳು ಹೃದಯವಿದ್ದಂತೆ. ಜೀವಿಗಳು ಹೃದಯವಿಲ್ಲದೆ-ರಕ್ತನಾಳಗಳಿಲ್ಲದೆ ಬದುಕಲು ಸಾಧ್ಯವೇ? ಅದೇ ರೀತಿ ಗ್ರಾಮೀಣ ಬದುಕೂ ಸಹ ಹಳ್ಳ ಕೊಳ್ಳ ಕೆರೆಗಳು ಸಂತುಷ್ಟಿಯಿಲ್ಲದ ಬದುಕು ದುಸ್ಥರ. ಹಿಂದೆ ಹಳ್ಳಿಗಳು ಉಳಿದಿದ್ದು ಹಳ್ಳಗಳಿಂದ, ಹಳ್ಳ ಕೊಳ್ಳಗಳಲ್ಲಿ ಹರಿಯುತ್ತಿದ್ದ ಜಲಾಧಾರಗಳಿಂದ. ಇಂದು ಹಳ್ಳಗಳೇ ಜನರಿಗೆ ಹಳ್ಳಿಯನ್ನು ಬಿಟ್ಟು ಹೋಗುವುದಕ್ಕೆ ಸೂಚನೆ ನೀಡುತ್ತಿರುವಂತೆ ಭಾಸವಾಗುತ್ತದೆ. ಹಳ್ಳಿಯ ಸೊಬಗನ್ನು ಕಣ್ಣೆದುರಿಗೆ ಕಟ್ಟಿಕೊಡುವ ಒಬ್ಬ ಕವಿ ಹೇಳಿದಂತೆ:



"ಹಳ್ಳ ಕೊಳ್ಳ ಹಾರೋದೇ ನಮ್ ಲಾಂಗ್ ಜಂಪು,
ಬೇಲಿಗೀಲಿ ಎಗರೋದೇ ನಮ್ ಹೈಜಂಪು
ಸೋರೇ ಬುರುಡೆಲ್ ದೋಣಿ ಮಾಡ್ಕೊಂಡ್ ಬೊಂಬಾಟ್
ನಮ್ ಮಿಂಚಿಂಗ್, ಕೆರೆಯ ಒಳಗಿನ ಪರ್ಪಂಚನೇ ನಾವು ಕಾಣುವ....."

ಎಂಬ ಹಾಡು ರೋಮಾಂಚನವೆನಿಸುತ್ತದೆ. ಆದರೆ ಈಗ ಹಳ್ಳ ಕೊಳ್ಳ ಹಾರಿದರೆ ನಮ್ಮ ಜೀವ ಹಾರುವುದರಲ್ಲಿ ಎರಡು ಮಾತಿಲ್ಲ. ಇನ್ನು ಹಳ್ಳಗಳ ಜೊತೆ ಅವರ ಸಂಬಂಧಿಕರಾದ ಕೆರೆಗಳ ಕಥೆ, ವ್ಯಥೆ. ಪ್ರಸ್ತುತವಾಗಿ ಕೆರೆಗಳಿಗೆ ನೀರಿನ ಒಳಹರಿವು ಕಡಿಮೆಯಾಗುತ್ತಿದೆ. ಕೆರೆಗಳ ಒತ್ತುವರಿ, ಕೆರೆಗಳಿಗೆ ನೀರು ಬರುತ್ತಿದ್ದ ಕಾಲುವೆಗಳ ಒತ್ತುವರಿಗಳಿಂದ ಇಂದು ಕೆರೆಗಳು ನೀರಿಲ್ಲದೆ ಲಾಟರಿ ಹೊಡೆಯುತ್ತಿವೆ. ಒಂದು ವೇಳೆ ವಾಡಿಕೆಗಿಂತ ಮಳೆ ಹೆಚ್ಚಾಗಿ ಬಂದರೂ, ಕೆರೆಗಳು ತುಂಬಿದರೂ ಕೆರೆಗಳಲ್ಲಿ ನೀರಿನ ಪ್ರಮಾಣ ಬೇಗ ಕಡಿಮೆಯಾಗುತ್ತಿದೆ. ಮೊನ್ನೆ ಇದೇ

ವಿಷಯವನ್ನು ಸ್ನೇಹಿತರಿಗೆ ಕೇಳಿದ್ದೆ. ಕೆರೆಗಳು ತುಂಬಿದರೂ ಬೋರ್ವೆಲ್ಗಳು ರಿಚಾರ್ಜ್ ಆಗುತ್ತಿಲ್ಲವಲ್ಲಾ ಏಕೆ ಅಂತಾ? ಆದರೆ ಉತ್ತರ ಬಂದದ್ದು "ಭೂಮಿಯಿಂದ ಇಷ್ಟು ವರ್ಷ ತೆಗೆದುಕೊಂಡಿದ್ದ ಸಾಲಕ್ಕೆ ಬಡ್ಡಿಯನ್ನು ತೆಗೆದುಕೊಳ್ಳುತ್ತಿದೆ, ಬಡ್ಡಿ ತೀರಿದ ಮೇಲೆ ಬೋರ್‌ವೆಲ್‌ಗಳು ರಿಚಾರ್ಜ್ ಆಗುತ್ತವೆ" ಎಂದು ಹೇಳಿದರು. ಅವರು ಹೇಳಿದ್ದು ಕಟು ಸತ್ಯವೇ ಆಗಿದೆ. ಒಟ್ಟಾರೆ ಹೇಳುವುದಾದರೆ ಮಾನವನು ಪರಿಸರದ ಪರಿಸ್ಥಿತಿಯನ್ನು ಬದಲಾಯಿಸಿದಂತೆ ಪರಿಸರವೂ ಮಾನವನಿಗೆ ಪರಿಪರಿಯಾಗಿ ಪರಿಣಾಮವನ್ನು ಒದಗಿಸುತ್ತಾ ಬರುತ್ತಿದೆ.



ಇಂತಹ ಭೀಕರ ಪರಿಸ್ಥಿತಿಯನ್ನು ಅರಿತ ಕೆಲವರು ಹಾಗೂ ಸಂಪೂರ್ಣ ಅರಿಯದ ಕೆಲವರು ಇಂದು ದೇಶಾದ್ಯಂತ ನದಿಗಳ ಜೋಡಣೆ ಮಾಡಲು ಹೊರಟಿರುವುದು, ನದಿಗಳ ನೀರನ್ನು ತಿರುಗಿಸಿ ಹರಿಸಲು ಹೊರಟಿರುವುದನ್ನು ನೋಡಿದರೆ ಯಾವ ದೃಷ್ಟಿಯಲ್ಲಿ ಜೋಡಣೆ ಮಾಡಿಕೊಳ್ಳಲು ಹೊರಟಿರುವುದು ಎಂಬ ಪ್ರಶ್ನೆ ಎಲ್ಲರಲ್ಲಿ ಮೂಡುತ್ತಿರುವುದು ಸಹಜವಾಗಿದೆ. ಇಂತಹ ಸಂದರ್ಭಗಳನ್ನು ರಾಜಕೀಯವಾಗಿ ಬಳಸಿಕೊಳ್ಳುವುದಕ್ಕೆ ಅವಹಣಿಸುತ್ತಿರುವ ರಾಜಕೀಯ ಪಕ್ಷಗಳು. ಇಲ್ಲಿಯವರೆಗೂ ಯಾವುದಾದರೂ ಒಂದು ಹಳ್ಳವನ್ನಾದರೂ - ತೊರೆಯನ್ನಾದರೂ ಪುನರುಜ್ಜೀವನಗೊಳಿಸಿದ್ದಾರೆಯೇ? ಅಥವಾ ಮರುಜನ್ಮ ನೀಡಿದ್ದಾರೆಯೇ? ಈ ಪ್ರಶ್ನೆಗಳಿಗೆ ಅವರೇ ಉತ್ತರಿಸಬೇಕು.

ಇತ್ತೀಚೆಗೆ ನದಿಗಳ ಪುನರುಜ್ಜೀವನದ ಕುರಿತು ಚರ್ಚೆಗಳಾಗುತ್ತಿರುವುದು ಸಕಾರಾತ್ಮಕ ಮಾರ್ಗವಾಗಿದ್ದರೂ, ಅದು ಎಷ್ಟರ ಮಟ್ಟಿಗೆ ಯಶಸ್ವಿಯಾಗುತ್ತದೆ ಎಂಬುದನ್ನು ವಿಮರ್ಶಾತ್ಮಕವಾಗಿ ಆಲೋಚಿಸಬೇಕಿದೆ. ಏಕೆಂದರೆ ನದಿಗಳು ಏಕಾಏಕಿ ಒಂದೇ ಜಾಗಗಳಲ್ಲಿ ಹುಟ್ಟುವುದಿಲ್ಲ, ಸಣ್ಣ ಸಣ್ಣ ಹಳ್ಳಗಳೆಲ್ಲಾ ಸೇರಿ ನದಿಗಳಾಗುತ್ತವೆ. ಆದ್ದರಿಂದ ಒಂದೇ ಬಾರಿ ನದಿಗಳಿಗೆ ಜೀವಕೊಡಲು ಕಷ್ಟಸಾಧ್ಯವಾದರೂ, ಪರಿಸರದಲ್ಲಿರುವ ಕೆರೆ-ಹಳ್ಳಗಳನ್ನು ಯುವಜನರು, ಸರ್ಕಾರದವರು, ಸಂಘಸಂಸ್ಥೆಗಳಲ್ಲಿರುವವರು ಉಳಿಸಿಕೊಳ್ಳಲೇಬೇಕಾದ ಅನಿವಾರ್ಯತೆ ಇದೆ. ಅದಲ್ಲದೆ ಇವುಗಳಿಗೆ ಮರು ಜೀವವನ್ನು ನೀಡುವ ಮೂಲಕ ಜಲಪಾತ್ರೆಗಳನ್ನು ಮತ್ತೆ ನಳನಳಿಸುವಂತೆ ಮಾಡಬೇಕಿದೆ. ಇದಕ್ಕಾಗಿ ಅರಣ್ಯ ಕೃಷಿಯನ್ನು ಉತ್ತೇಜನ ಮಾಡುವ ಮತ್ತು ಅದರ ಅಳವಡಿಕೆಯೇ ಉತ್ತಮ ಮಾರ್ಗವೆಂದು ಸೂಚಿಸಬಹುದು.





ಛಾಯಾಚಿತ್ರ-ಲೇಖನ
ಜಿ. ಮಂಜುನಾಥ್ ಅಮಲಗೊಂದಿ
ತುಮಕೂರು ಜಿಲ್ಲೆ.

# ವನದಾಳದ ಮಾತು

ಮೂಲತಃ ತುಮಕೂರು ಜಿಲ್ಲೆಯವರಾದ ಹೇಮಂತ್ ಕುಮಾರ್ ಎಂ. ಎನ್. ರವರು ಹುಟ್ಟಿ-ಬೆಳೆದದ್ದು ನಗರಕ್ಕೆ ಹತ್ತಿರವಿರುವ ಕುರುಚಲು ಕಾಡು ಇರುವ ಪ್ರದೇಶದಲ್ಲಿ. ಪದವಿ ಮುಗಿದ ಬಳಿಕ ಅರಣ್ಯ ಇಲಾಖೆಯಲ್ಲಿ ಅರಣ್ಯ ರಕ್ಷಕ ಹುದ್ದೆಗೆ ಸೇರಿ, ಕೊಡಗು ಜಿಲ್ಲೆಯಲ್ಲಿ ತಮ್ಮ ವೃತ್ತಿಜೀವನವನ್ನು ಆರಂಭಿಸಿದರು. ಸದಾ ನಿತ್ಯಹರಿದ್ವರ್ಣ ಪ್ರದೇಶದಲ್ಲಿ ಮೊದಮೊದಲು ಅವರಿಗೆ ಬೇಸರವಾಗುತ್ತಿತ್ತಂತೆ. ಆದರೆ ಬರಬರುತ್ತ ತಮ್ಮ ಸುತ್ತಲೂ ಇರುವ ಜೀವಸಂಕುಲದ ಮೇಲೆ ಆಸಕ್ತಿ ಹೆಚ್ಚಾಯಿತು ಎನ್ನುವ ಇವರು, ಪ್ರಾಣಿಗಳೆಂದರೆ ಕೇವಲ ಹುಲಿ, ಆನೆ, ಜಿಂಕೆಗಳಷ್ಟೇ ಅಲ್ಲ, ಒಂದು ಸಣ್ಣ ಕೀಟವೂ ಪ್ರಕೃತಿಯಲ್ಲಿ ತನ್ನದೇ ಪಾತ್ರವನ್ನು ವಹಿಸುವುದನ್ನು ಕಂಡು ಅವುಗಳ ಮೇಲಿನ ಆಸಕ್ತಿ ಹೆಚ್ಚಾಯಿತು ಎನ್ನುತ್ತಾರೆ. ಬಯಲು ಸೀಮೆಯಲ್ಲಿ ಕಾಣದಿರುವ ಕೇವಲ ಇಲ್ಲಿ ಮಾತ್ರ ಕಾಣಸಿಗುವ ಪಕ್ಷಿಗಳನ್ನು ಗುರುತಿಸಿದ ಮೇಲೆ ಕಾಡೇ ಹತ್ತಿರವಾಯಿತು ಎನ್ನುವ ಇವರು ಕಳೆದ ಐದು ವರ್ಷಗಳಿಂದ ಇಲ್ಲಿಯೇ ಸೇವೆ ಸಲ್ಲಿಸುತ್ತಿದ್ದಾರೆ. ಈಗ ಇವರಿಗೆ ಇಲ್ಲಿ ಸಿಗುವ ಪ್ರಾಣಿ, ಪಕ್ಷಿ, ಹಾವು, ಚಿಟ್ಟೆ, ಕಪ್ಪೆಗಳ ಬಗ್ಗೆ ವಿಶೇಷ ಒಲವು ಇದೆ. ಹಾಗೆಯೇ ಅವುಗಳ ಛಾಯಾಗ್ರಹಣ ಕೂಡ ಮಾಡುತ್ತಾರೆ.



## ಓರಿಯೆಂಟಲ್ ಡಾಲರ್ ಬರ್ಡ್

ಸದಾ ಹಸಿರಾಗಿರುವ ನಿತ್ಯಹರಿದ್ವರ್ಣ ಕಾಡು, ಇನ್ನೇನು ಬೇಸಿಗೆ ಕೊನೆಯಾಗಿ ಮಳೆಗಾಲ ಪ್ರಾರಂಭವಾಗುವುದರಲ್ಲಿತ್ತು. ಅದಾಗಲೇ ಕೆಲವು ಬಾರಿ ವರುಣನ ಸಿಂಚನವಾಗಿದ್ದರೂ ಸಹ, ಪಶ್ಚಿಮ ಘಟ್ಟದ ನಿಜವಾದ ಮಳೆಗಾಲ ಪ್ರಾರಂಭವಾಗುವ ಹಾಗಾಗಿತ್ತು. ದಿನನಿತ್ಯದಂತೆ ಅಂದೂ ಸಹ ಗಸ್ತಿಗೆ ಹೋಗಿದ್ದ ನಾನು ಮತ್ತು ನನ್ನ ಸಿಬ್ಬಂದಿಗಳು, ದಟ್ಟವಾದ ಮೋಡಕವಿದ ವಾತಾವರಣ ಕಂಡು ಸ್ವಲ್ಪ ಬೇಗನೆ ಶಿಬಿರದ ಕಡೆಗೆ ಹೆಜ್ಜೆ ಹಾಕಿದೆವು. ಇನ್ನೇನು ಶಿಬಿರ ತಲುಪಬೇಕೆನ್ನುವಷ್ಟರಲ್ಲಿ ಕಪ್ಪು ಮೋಡ ಸರಿದು ಆಕಾಶ ತಿಳಿಯಾದಂತೆ ಗೋಚರಿಸಿತು, ಶಿಬಿರ ತಲುಪಿ ನನ್ನ ಬ್ಯಾಗು, ಕೋವಿ ತೆಗೆದಿಟ್ಟು ಸ್ವಲ್ಪ ವಿಶ್ರಾಂತಿಗೆಂದು ಬಾಗಿಲ ಬಳಿ ಕುಳಿತುಕೊಂಡೆ. ಇದ್ದಕ್ಕಿದ್ದಂತೆ ಏನೋ ವಿಚಿತ್ರವಾಗಿ ಕೂಗಿದಂತೆ ಸದ್ದಾಯಿತು. ಈ ಶಬ್ದವೇ ವಿಚಿತ್ರವಾಗಿದ್ದು, ಮುಂಚೆ ಈ ರೀತಿಯ ಶಬ್ದವನ್ನು ಎಂದೂ ಕೇಳಿರಲಿಲ್ಲ. ಯಾವುದೋ ಪಕ್ಷಿಯೇ ಇರಬೇಕೆಂದು ತಕ್ಷಣ ನನ್ನ ಕ್ಯಾಮೆರ ತೆಗೆದುಕೊಂಡು ಹೊರಹೋಗಿ ಶಬ್ದ ಬಂದ ಮರದ ಕಡೆಗೆ ವೀಕ್ಷಿಸಿದೆ. ಎಲೆಗಳೆಲ್ಲಾ ಉದುರಿ ಬೋಳಾಗಿರುವ ತುದಿಯಲ್ಲಿ ಕಾಗೆಯಂತೆ ಕಪ್ಪಾಗಿರುವಂತೆ ಕಾಣುವ ವಿಚಿತ್ರ ಪಕ್ಷಿಯನ್ನು ನೋಡಿದೆ. ಈ ಹಿಂದೆ ಎಂದೂ ಕೂಡ

ಇಂತಹ ಪಕ್ಷಿಯನ್ನು ನೋಡಿರಲಿಲ್ಲ. ಯಾವುದಕ್ಕೂ ಇರಲಿ ಎಂದು ತಕ್ಷಣ ನನ್ನ ಕ್ಯಾಮರದಿಂದ ಒಂದೆರಡು ಛಾಯಾಚಿತ್ರಗಳನ್ನು ತೆಗೆದೆ. ನಾನು ಬಂದುದರಿಂದ ಗಾಬರಿಯಾದಂತೆ ಕಂಡುಬಂದ ಪಕ್ಷಿ ಮತ್ತೊಂದು ಕೊಂಬೆಗೆ ಹಾರಿತು. ಈ ರೀತಿ 2-3 ಬಾರಿ ಹಾರಿದರು ಸಹ ಎಲೆಮರೆಯಲ್ಲಿ ಕುಳಿತುಕೊಳ್ಳದೆ, ಬೋಳಾದ ಕೊಂಬೆಯ ಮೇಲೆಯೇ ಕುಳಿತಿತ್ತು.



ಈ ಹಿಂದೆ ಒಮ್ಮೆ ಗೆಳೆಯನಿಂದ  ಡಾಲರ್ ಪಕ್ಷಿಯ ಬಗ್ಗೆ ಕೇಳಿದ್ದೆ. ಇದು ಅದೇನ? ಎನ್ನುವ ಸಂದೇಶ ಮೂಡಿತು. ಇರಲಿ ಎಂದು ನಿಧಾನವಾಗಿ ಹತ್ತಿರಕ್ಕೆ ಹೋಗುವಂತೆ ಹೋಗಿ ಇನ್ನೆರಡು ಛಾಯಾಚಿತ್ರಗಳನ್ನು ತೆಗೆದುಕೊಂಡೆ, ಆಗಲೇ  ಖಾತರಿಯಾಯ್ತು ಇದು ಡಾಲರ್ ಪಕ್ಷಿ ಎಂದು. ಮನಸ್ಸಿಗೆ ಒಂದು ರೀತಿಯ ಪುಳಕವಾಯಿತು. ಏಕೆಂದರೆ ಈ ಪಕ್ಷಿ ಕಾಣಸಿಗುವುದೇ ಅಪರೂಪ. ಈ ಭಾಗದಲ್ಲಿ  ಬಹಳ ವರ್ಷಗಳ ನಂತರ ಸಿಕ್ಕಿದ್ದು. ಇಷ್ಟು ಯೋಚನೆ ಮಾಡುತ್ತಿರುವಾಗಲೇ ಪಕ್ಷಿಗೆ ಏಕೋ ಬೇಸರವಾದಂತೆ, ಕೋಪ ಬಂದಂತೆ ಕಂಡಿತು. ತಾನಿರುವ ಮರವನ್ನು ಬಿಟ್ಟು ಕಾಡಿನೊಳಗೆ ಹಾರಿಹೋಯಿತು. ಒಳ್ಳೆಯ ಛಾಯಾಚಿತ್ರ ಸಿಗಲಿಲ್ಲವಲ್ಲ ಎಂಬ ಬೇಸರ ಉಂಟಾಗಿ, ಶಿಬಿರದ ಕಡೆಗೆ ಹೆಜ್ಜೆ ಹಾಕತೊಡಗಿದೆ, ಆದರೆ ಅದು ಕೆಲವೇ ಕ್ಷಣಗಳಲ್ಲಿ. ಕಾಣಿಸಿಕೊಂಡಿತು ಹಾರಿಹೋಗಿದ್ದ ಪಕ್ಷಿ ಇನ್ನೊಂದು ಪಕ್ಷಿಯೊಂದಿಗೆ ಬಂದು ಶಿಬಿರದ ಎದುರಿನ ಕೆಳಭಾಗದಲ್ಲಿರುವ ಗಿಡದ ಮೇಲೆ ಕುಳಿತವು. ನನ್ನ ಸಂತೋಷಕ್ಕೆ ಪಾರವೇ ಇರಲಿಲ್ಲ.

ತಡಮಾಡದೆ ನನ್ನ ಮೂರನೇ ಕಣ್ಣಾದ ಕ್ಯಾಮರದಿಂದ ಪಕ್ಷಿಯ ಚಿತ್ರಗಳನ್ನು ತೆಗೆದೆ. ಏನೋ ನೋಡಿದಂತೆ ಕುತ್ತಿಗೆಯನ್ನು ಆಚೀಚೆ ಆಡಿಸುತ್ತಾ, ಪಕ್ಷಿಯು ನೆಲದ ಕಡೆಗೆ ಹಾರಿ ನಂತರ ಅಲ್ಲಿಯೇ ಬಂದು ಕುಳಿತಿತು. ಆಗಲೇ ತಿಳಿದಿದ್ದು ಅದು ಕೀಟವನ್ನು ಹಿಡಿಯಲು ಹೋಗಿತ್ತೆಂದು. ಈ ಪಕ್ಷಿಯು ರೋಲರ್ ಕುಟುಂಬಕ್ಕೆ ಸೇರಿದ್ದಾಗಿದೆ. ಅಂದರೆ ಇದು ಕರ್ನಾಟಕದ ರಾಜ್ಯ ಪಕ್ಷಿ ನೀಲಕಂಠ ಪಕ್ಷಿಯ ಕುಟುಂಬಕ್ಕೆ ಸೇರಿದ್ದು. ರೂಪದಲ್ಲಿಯೂ ಸಹ ಇದು ನೀಲಕಂಠ ಪಕ್ಷಿಯನ್ನೇ ಹೋಲುತ್ತದೆ. ಆಸ್ಟ್ರೇಲಿಯಾದಿಂದ ಜಪಾನ್ ವರೆಗೆ ಹಾಗು ಭಾರತದ ದಕ್ಷಿಣ ಭಾಗ ಪೂರ್ವಕರಾವಳಿಯ ಪ್ರದೇಶಗಳು ಹಾಗೂ ಈಶಾನ್ಯ ಭಾರತದ ಕೆಲವು ರಾಜ್ಯಗಳಲ್ಲಿ ಕಂಡುಬರುತ್ತದೆ.

ಇದರ ರೆಕ್ಕೆಗಳ ಮೇಲಿರುವ ಉಂಗುರಾಕಾರದ ಚುಕ್ಕೆಗಳಿಂದ ಇದಕ್ಕೆ ಈ ಹೆಸರು ಬಂದಿದೆ. ಪ್ರೌಢ ವಯಸ್ಕ ಪಕ್ಷಿಯು 27cm ನಿಂದ 31cm ವರೆಗೆ ಉದ್ದವಿರುತ್ತದೆ. ನೀಲಿ ಮಿಶ್ರಿತ ಹಸಿರು ಬಣ್ಣ ಇದರ ಬೆನ್ನು ಮತ್ತು ರೆಕ್ಕೆ ಭಾಗದಲ್ಲಿ ಕಂಡುಬರುತ್ತದೆ. ಇದರ ಸೊಂಟ ಮತ್ತು ಬಾಲದ ಕೆಳಭಾಗ ತೆಳು ನೀಲಿ ಮಿಶ್ರಿತ ಹಸಿರಿನಿಂದ ಕೂಡಿರುತ್ತದೆ. ಕುತ್ತಿಗೆಯ ಭಾಗ ಹೊಳೆಯುವ ನೀಲಿ ಬಣ್ಣದಿಂದ ಕೂಡಿರುತ್ತದೆ. ಇದರ ರೆಕ್ಕೆಗಳು ಗಾಢ ನೀಲಿ ಬಣ್ಣ ಹೊಂದಿದ್ದು ಇದರಲ್ಲಿ ತಿಳಿ ನೀಲಿ ಬಣ್ಣದ ಸುರುಳಿಗಳಿರುತ್ತವೆ. (ಈ ಸುರುಳಿಗಳನ್ನು ಕೇವಲ ಪಕ್ಷಿಯು ಹಾರುವ ಸಮಯದಲ್ಲಿ ಮಾತ್ರ ನೋಡಲು ಸಾಧ್ಯ) ಕೊಕ್ಕು ಚಿಕ್ಕದಾಗಿದ್ದು ಅಗಲವಾಗಿರುತ್ತದೆ. ಹೆಣ್ಣು ಪಕ್ಷಿಗಿಂತ ಗಂಡು ಪಕ್ಷಿಯು ನೋಡಲು ಸುಂದರವಾಗಿರುತ್ತದೆ.



ಆಗಲೇ ನನಗೆ ತಿಳಿದಿದ್ದು, ನಾನು ಮೊದಲು ನೋಡಿದ್ದು ಗಂಡು ಪಕ್ಷಿಯೆಂದು. ನಾನು ಇನ್ನೂ ಹತ್ತಿರ ಹೋಗಲು ಪ್ರಾರಂಭಿಸಿದಾಗ ಅವುಗಳಿಗೆ ಗಾಬರಿಯಾಗಿ ಅಲ್ಲಿಂದ ಹಾರಿ ಹತ್ತಿರದಲ್ಲೇ ಇದ್ದ ಎತ್ತರವಾದ ತಾರೆ ಮರದ ತುದಿಯಲ್ಲಿದ್ದ ಬೋಳು ಕೊಂಬೆಯ ಮೇಲೆ ಕುಳಿತವು. ಹಾರುವಾಗ ಅವುಗಳ ಛಾಯಾಚಿತ್ರಗಳನ್ನು ತೆಗೆಯಲು ಪ್ರಯತ್ನಿಸಿದೆನಾದರೂ ಅದು ಸಫಲವಾಗಲಿಲ್ಲ. ಮರಿಗಳಲ್ಲಿ ಕುತ್ತಿಗೆಯ ಭಾಗದಲ್ಲಿ ನೀಲಿ ಬಣ್ಣ ಇರುವುದಿಲ್ಲ. ಹಾಗೂ ಕೊಕ್ಕು ಮತ್ತು ಕಾಲುಗಳು ಬೂದು ಬಣ್ಣದಿಂದ ಕೂಡಿರುತ್ತವೆ. ಆದರೆ ಪ್ರೌಢ ವಯಸ್ಕ ಪಕ್ಷಿಗಳ ಕಾಲಿನ ಬಣ್ಣ ಕೆಂಪಾಗಿರುತ್ತದೆ. ಸಾಮಾನ್ಯವಾಗಿ ಒಂಟಿಯಾಗಿ ಕಾಣಸಿಗುವ ಈ ಪಕ್ಷಿಗಳು ಕುಳಿತುಕೊಳ್ಳುವಾಗ ಮರಗಳ ಎಲೆಗಳಿಲ್ಲದ, ಬೋಳಾಗಿರುವ ಕಾಂಡ ಅಥವಾ ಕೊಂಬೆಯಲ್ಲಿಯೇ ಕುಳಿತುಕೊಳ್ಳುತ್ತವೆ. ಮೃದುವಾದ, ಬೋಳಾದ, ಮರದ ಪೊಟರೆಗಳಲ್ಲಿ ಗೂಡುಕಟ್ಟುತ್ತವೆ. ಸೆಪ್ಟೆಂಬರ್ ನಿಂದ ಏಪ್ರಿಲ್ ವರೆಗೆ ಸಂತಾನೋತ್ಪತ್ತಿ ನಡೆಸುತ್ತವೆ.

ಪಪುವಾ, ನ್ಯೂಗಿನಿಯಾ ಹಾಗೂ ಸಮೀಪದ ದ್ವೀಪಗಳಲ್ಲಿ ಚಳಿಗಾಲದಲ್ಲಿ ಸಂತಾನೋತ್ಪತ್ತಿ ನಡೆಸುತ್ತವೆ. ಸೆಪ್ಟೆಂಬರ್ ತಿಂಗಳಿನಲ್ಲಿ ಉತ್ತರ ಮತ್ತು ಪೂರ್ವ ಆಸ್ಟ್ರೇಲಿಯಾದ ಪ್ರದೇಶಕ್ಕೆ ವಲಸೆ ಬರುವ ಇವು ಮಾರ್ಚ್ ನಿಂದ ಏಪ್ರಿಲ್ ನಲ್ಲಿ ಮರಳಿ ಪಪುವಾ, ನ್ಯೂಗಿನಿಯಾ ಹಾಗೂ ಪಕ್ಕದ ದ್ವೀಪಗಳಿಗೆ ವಲಸೆಹೋಗುತ್ತವೆ. ಇದರ ಕೂಗುವ ಧ್ವನಿಯು ಕರ್ಕಶವಾಗಿದ್ದು ಕುಕ್ ಕುಕ್ ಕುಕ್ ಎಂದು ಒಂದೇ ಸಮನೆ ಎರಡು-ಮೂರುಬಾರಿ ಕೂಗುತ್ತದೆ.

ಕೀಟಗಳು ಇವುಗಳ ಮುಖ್ಯ ಆಹಾರವಾಗಿದ್ದು, ಮರಿಗಳು ಪ್ರೌಢವಯಸ್ಸಿಗೆ ಬರುವವರೆಗೂ ತಂದೆ ತಾಯಿಯ ಆರೈಕೆಯಲ್ಲಿಯೇ ಇರುತ್ತವೆ. ವಯಸ್ಸಿಗೆ ಬಂದ ನಂತರ ತಂದೆ ತಾಯಿಯಿಂದ ಬೇರೆಯಾಗುತ್ತದೆ. ಕರ್ನಾಟಕದ ದಕ್ಷಿಣ ಭಾಗ, ಕೇರಳ ಪೂರ್ವ ಕರಾವಳಿಯ ಪ್ರದೇಶಗಳು, ಪಶ್ಚಿಮ ಬಂಗಾಳ ಮತ್ತು ಪೂರ್ವ ಭಾರತದ ರಾಜ್ಯಗಳಲ್ಲಿ ಈ ಪಕ್ಷಿ ಕಂಡುಬರುತ್ತದೆ. ಆದರೆ ಈ ಭಾಗದಲ್ಲಿ ಇದೇ ಮೊದಲು ನಾನು ನೋಡಿದ್ದು. ಈ ಪಕ್ಷಿಯನ್ನು ನೋಡಲು ಮತ್ತು ಛಾಯಾಚಿತ್ರ ತೆಗೆಯಲು, ಹಿಮಾಲಯದ ತಪ್ಪಲಿನ ಮಹಾನಂದ ವನ್ಯಧಾಮಕ್ಕೆ ಪಕ್ಷಿ ಪ್ರಿಯರು ಭೇಟಿ ನೀಡುವುದು ಹೆಚ್ಚು. ಆದರೆ ಅಲ್ಲಿಯೂ ಸಹ ಈ ಪಕ್ಷಿಯನ್ನು ನೋಡಲು ಅದೃಷ್ಟ ಬೇಕೇ ಬೇಕು.

ಮರದ ತುದಿಯಲ್ಲಿದ್ದ ಜೋಡಿ ನನ್ನ ಇರುವಿಕೆಯಿಂದ ಕಸಿವಿಸಿಗೊಂಡಂತೆ ಕಂಡಿತು. ತಮ್ಮ ಖಾಸಗೀತನಕ್ಕೆ ಧಕ್ಕೆಯಾಗುತ್ತಿದೆ ಎಂದು ಮಾತನಾಡಿಕೊಳ್ಳುತ್ತಿದ್ದವೇನೋ? ಎನಿಸಿತು. ಪಡುವಣದ ಸೂರ್ಯ ಜಾರುತ್ತಾ ಕತ್ತಲು ಆವರಿಸಲಾರಂಭಿಸಿತು. ಕತ್ತಲಾಗಿದ್ದರಿಂದ ಅವುಗಳು ಕೂಡ ತಮ್ಮ ಮನೆಗೆ ಹೊರಡುವ ಆಲೋಚನೆಯಲ್ಲಿದ್ದವೋ? ಅಥವಾ ತಮ್ಮ ಮುಂದಿನ ಜೀವನದ ಬಗ್ಗೆ ಚರ್ಚೆ ನಡೆಸುತ್ತಿದ್ದವೋ? ಅಥವಾ ಈ ಮನುಷ್ಯನ ಆಸೆಬುರುಕತನದಿಂದ ಎಲ್ಲಿ ಮುಂದೆ ನಮ್ಮ ಸಂತತಿಗೆ ಕುತ್ತು ಬರುತ್ತದೆಯೋ ಏನೋ ಎಂಬ ಆತಂಕ ಕಾಡಲಾರಂಭಿಸಿದೆ ಎಂಬಂತೆ, ಆ ಮುದ್ದಾದ ಜೋಡಿ ಹಕ್ಕಿಗಳು ಅಲ್ಲಿಂದ ಪುರ್ರೆಂದು ಜೊತೆಯಾಗಿ ಹಾರುತ್ತ ಕಾಡಿನ ಮರೆಯಲ್ಲಿ ಮರೆಯಾದವು. ನಿಜಕ್ಕೂ ಈ ಜೋಡಿ ಹಕ್ಕಿಗಳ ಆ ಸಂಭಾಷಣೆ ನನ್ನನ್ನು ಅತೀವ ಕುತೂಹಲ, ಬೇಜಾರು ಮತ್ತು ಆತಂಕಕ್ಕೀಡು ಮಾಡಿದ್ದು ಸುಳ್ಳಲ್ಲ.





ಛಾಯಾಚಿತ್ರ-ಲೇಖನ

ಹೇಮಂತ್ ಕುಮಾರ್ ಎಂ. ಎನ್.

ತುಮಕೂರು ಜಿಲ್ಲೆ.



# ಹಾವೆಂಬ ಸರೀಸೃಪ ಹಾವಾಡಿಗನೆಂಬ ಮಂತ್ರಗಾರ

ನಾಗರಹಾವುಗಳು ಹಾವಾಡಿಗನ ಹಾಗೂ ಪ್ರೇಕ್ಷಕನ ಅಚ್ಚುಮೆಚ್ಚಿನ ಹಾವು. ಹಾವಾಡಿಗರು ನಾಗರಹಾವಿನ ಹಲ್ಲು ಕೀಳುವುದಕ್ಕಿಂತಲೂ ಬಹಳಾ ಮೊದಲೇ ಜನರಲ್ಲಿ ಭಕ್ತಿ ಹಾಗೂ ಶ್ರದ್ಧೆಯನ್ನು ಮೂಡಿಸಿತ್ತು. ಕಾಡಿನಲ್ಲಿ ಅಚಾನಕ್ ನಾಗರಹಾವು ಎದುರಾದಾಗ, ಅದು ತಕ್ಷಣ ಹೆಡೆ ಬಿಚ್ಚುವುದನ್ನು ನೋಡುವುದೇ ಜೀವನದಲ್ಲಿ ಮರೆಯಲಾಗದ ಅನನ್ಯ ಅನುಭವ.

ಹಾವುಗಳ ಆಹಾರವಾದ ಇಲಿಗಳು ಮನುಷ್ಯನ ವಾಸಸ್ಥಳದಲ್ಲಿ, ಕಸದ ಗುಡ್ಡೆಗಳಲ್ಲಿ, ಹೊಲಗದ್ದೆಗಳಲ್ಲಿ ಯಥೇಚ್ಛವಾಗಿದ್ದರೆ ಅವುಗಳನ್ನು ಹುಡುಕಿಕೊಂಡು ಬರುವ ನಾಗರಹಾವು, ಮನುಷ್ಯರಿಗೆ ಆಗಾಗ ಎದುರಾಗುತ್ತಿರುತ್ತದೆ. ಇದೊಂದು ಮೊದ್ದು ಹಾವಾಗಿದ್ದು, ಆಕ್ರಮಣಾಶೀಲತೆ ಕಡಿಮೆ. ತನ್ನನ್ನು ರಕ್ಷಿಸಿಕೊಳ್ಳುವ ಸಮಯದಲ್ಲಿ ಮತ್ತೇನೂ ಮಾಡಲಾಗದ ಅನಿವಾರ್ಯ ಸ್ಥಿತಿಯಲ್ಲಿ ಮಾತ್ರ ಕಚ್ಚುವ ನಿರ್ಧಾರ ಮಾಡುತ್ತದೆ. ಇವುಗಳ ಕಡಿತದಿಂದ ಪ್ರತಿವರ್ಷ ಬಹಳಷ್ಟು ಜನ ಮರಣ ಹೊಂದುತ್ತಾರೆ. ಹೆಡೆ ಎತ್ತುವುದು ಹಾಗೂ ನಂಜೇರಿಸುವ ಅವುಗಳ ವಿಷಕಾರಿ ಕಡಿತ ನಾಗರಹಾವನ್ನು ಪೂಜ್ಯನೀಯವಾಗಿಸಿದೆ. ಹಿಂದೂ ದೇವತೆಗಳಾದ ಈಶ್ವರ, ಗಣೇಶ, ದೇವಸ್ಥಾನದಲ್ಲಿರುವ ಕೆತ್ತನೆಗಳ ಉದ್ದಗಲಕ್ಕೂ ಈ ಹಾವುಗಳು ವ್ಯಾಪಿಸಿಕೊಂಡಿವೆ.

ಹಾವುಗಳಿಗೋಸ್ಕರ ಆಗಸ್ಟ್ ತಿಂಗಳಿನಲ್ಲಿ (ಶ್ರಾವಣಮಾಸದ ಐದನೆ ದಿನ) ನಾಗರ ಪಂಚಮಿಯನ್ನು ಆಚರಿಸುತ್ತಾರೆ. ಹಿಂದೂ ಕ್ಯಾಲೆಂಡರಿನಲ್ಲಿ ಯುಗಾದಿಯ ನಂತರ ಬರುವ ಮೊದಲ ಹಬ್ಬಗಳಲ್ಲಿ ನಾಗರಪಂಚಮಿಯೂ ಒಂದು. ಮಹಾರಾಷ್ಟ್ರ, ಕರ್ನಾಟಕ ಹಾಗೂ ದೇಶದ ಕೆಲವು ಭಾಗಗಳಲ್ಲಿ ನಾಗರಪಂಚಮಿಯನ್ನು ಸಡಗರದಿಂದ ಆಚರಿಸುತ್ತಾರೆ. ಮಹಾರಾಷ್ಟ್ರದ ಬತ್ತೀಸ್ ಶಿರಾಳದಲ್ಲಿ ನಾಗರಪಂಚಮಿಯದಿನ ನೂರಾರು ಹಾವುಗಳನ್ನು ಹಿಡಿದು ಪ್ರದರ್ಶನಕ್ಕಿಡುತ್ತಾರೆ. ಇತ್ತೀಚಿನ ವರ್ಷಗಳಲ್ಲಿ ವನ್ಯಮೃಗ ಸಂರಕ್ಷಣಾ ಕಾಯ್ದೆಯನ್ವಯ ಈ ಆಚರಣೆಯನ್ನು ತಡೆಗಟ್ಟಿದ್ದಾರೆ.




ಮಹಾರಾಷ್ಟ್ರದ ಬತ್ತೀಸ್ ಶಿರಾಳದಲ್ಲಿ ನಾಗರಪಂಚಮಿಗೆ ಹಿಡಿಯುವ ಹಾವುಗಳ ಹಲ್ಲನ್ನು ಕೀಳುವುದಿಲ್ಲ, ಹಲ್ಲನ್ನು ಕಿತ್ತರೆ ಅವುಗಳಿಗೆ ತೊಂದರೆಯಾಗುತ್ತದೆ. ಅಲ್ಲಿಯ ಹುಡುಗರು ಕೇರೆಹಾವು ಹಾಗೂ ವಿಷಕಾರಿಯಲ್ಲದ ಪಟ್ಟೆಹಾವುಗಳನ್ನು ಹಿಡಿದು ಪ್ರವಾಸಿಗರಿಗೆ ಛಾಯಚಿತ್ರಗಳನ್ನು ತೆಗೆಸಿಕೊಳ್ಳಲು ಬಾಡಿಗೆಗೆ ನೀಡುತ್ತಾರೆ. ಈ ಪರಿಪಾಠ ಸೆರೆಯಾದ ಹಾವುಗಳಲ್ಲಿ ಒತ್ತಡವನ್ನುಂಟು

ಮಾಡುತ್ತದೆ. ಹಾವುಗಳನ್ನು ಕಾಪಾಡಲು ಇಲ್ಲಿಯ ಜನರಿಗೆ ತಿಳುವಳಿಕೆ ನೀಡುವ ಅವಶ್ಯಕತೆ ಇದೆ. ಮಹಾರಾಷ್ಟ್ರ ಹೊರತುಪಡಿಸಿ ಭಾರತದ ಇತರೆಡೆಗಳಲ್ಲಿ ಹಾವಾಡಿಗರು ಹಲ್ಲುಕಿತ್ತ ಹಾವುಗಳನ್ನು ಅಥವಾ ಬಾಯಿ ಹೊಲಿದ ಹಾವುಗಳನ್ನು ಭಕ್ತರ ಸೇವೆಗೆ ನೀಡಿ ಹಣ ಗಳಿಸುತ್ತಾರೆ. ಭಕ್ತರು ಮಕ್ಕಳಿಗೆ ಕೊಡಬೇಕಾದ ಹಾಲನ್ನು ಹಾವಿಗೆರೆದು ದಂಡ ಮಾಡುತ್ತಾರೆ.

ಸಾಂಪ್ರದಾಯಿಕ ಹಾವಾಡಿಗ ಕಲೆಯು ನಶಿಸಿಹೋಗುತ್ತಿರುವುದು ದುರಂತವೇ ಆದರೂ ಹಾವಾಡಿಗರು ಸುಂದರಹಾವುಗಳನ್ನು ನಡೆಸಿಕೊಳ್ಳುವ ರೀತಿ ಸಹಿಸಲಾಗುವುದಿಲ್ಲ. 1970 ರಲ್ಲಿ ಇರುಳರ ಸಹಕಾರ ಸಂಘ ಸ್ಥಾಪಿಸುವುದರ ಜೊತೆಗೆ ಹಾವಾಡಿಗರ ಸಂಘ ಸ್ಥಾಪಿಸುವ ಯೋಜನೆಯೂ ಇತ್ತು. ಮೂಲದಲ್ಲಿ ಅವರು ಬರಿಗಾಲಿನಲ್ಲಿ ನಡೆದಾಡುವ ಪರಿಸರವಾದಿಗಳೂ ಹೌದು. [barefoot environmental educationists (BEES]. ಅವರು ಹೇಗೆ ವಿಷಕಾರಿಹಾವುಗಳಿಂದ ದೂರವಿರಬೇಕು, ಹಾವಿನ ವಿಷದ ಪ್ರತ್ಯೌಷಧ ಹಾಗೂ ಇನ್ಯಾವುದೇ ಔಷಧವು ಹಾವಿನ ವಿಷದ ಪ್ರಭಾವವನ್ನು ತಡೆಗಟ್ಟಲಾಗದು ಎಂಬಿತ್ಯಾದಿ ವಿಷಯಗಳ ಬಗ್ಗೆ ಅವರಿಗಿರುವ ಸಾವಿರಾರು ವರ್ಷಗಳ ಅನುಭವದಿಂದ ಜನರಿಗೆ ತಿಳುವಳಿಕೆ ನೀಡಬಹುದಿತ್ತು. ಅದು ಸಾಧ್ಯವಾಗಲು ಅವರು ಹಾವಿನ ಹಲ್ಲುಗಳನ್ನು ಕೀಳದೆ ಇರುವುದು, ಅವುಗಳ ಬಗ್ಗೆ ಕಟ್ಟು ಕಥೆಗಳನ್ನು ಹರಡದೆ ಇರುವುದು, ಹೀಗೆ ಇಂದಿನ ಕೆಲ ಕಟ್ಟುನಿಟ್ಟಿನ ಕಾನೂನುಗಳನ್ನು ಪಾಲಿಸಬೇಕಿತ್ತು. ಹಾವಾಡಿಗರ ಸಹಕಾರ ಸಂಘವನ್ನು ಸ್ಥಾಪಿಸಲಾಗಲಿಲ್ಲ. ಕಾಲಾನುಕ್ರಮದಲ್ಲಿ ಹಾವಾಡಿಗರು ತುಂಬಾ ಕಡಿಮೆಯಾಗುತ್ತಿದ್ದಾರೆ. ಹಾವುಗಳನ್ನು ವನ್ಯಜೀವಿ ಸಂರಕ್ಷಣೆ ಕಾಯ್ದೆಯ ಶೆಡ್ಯೂಲ್ 2 ರ ಪ್ರಕಾರ ರಕ್ಷಿಸಲ್ಪಟ್ಟಿರುವುದರಿಂದ, ಅಪ್ಪಣೆ ಇಲ್ಲದೆ ಹಾವುಗಳನ್ನು ಇರಿಸಿಕೊಂಡರೆ ಜೈಲು ಶಿಕ್ಷೆ ಖಾಯಮ್ ಆಗಿದೆ. ಪ್ರಾಣಿದಯಾಸಂಘದವರು ಸುಮಾರು ನಗರಗಳಲ್ಲಿ ಹಾವಾಡಿಗರನ್ನು ಬಂಧಿಸಿ ಅವರಲ್ಲಿರುವ ಹಾವುಗಳನ್ನು ವಶಕ್ಕೆ ಪಡೆದು ಸಂರಕ್ಷಿಸಿದ್ದಾರೆ.

ವರ್ಷಕ್ಕೆ ಸುಮಾರು 40 ಸಾವಿರಜನ ಹಾವಿನ ಕಡಿತಕ್ಕೆ ಬಲಿಯಾಗುವ ದೇಶದಲ್ಲಿ ಹಾವುಗಳನ್ನು ಪೂಜಿಸುತ್ತಾರೆ. ಇಂದಿಗೂ ಬಹಳಷ್ಟು ಜನ ನಾಗರಪಂಚಮಿಯನ್ನು ಹಾವಾಡಿಗರು ಹಿಡಿವ ಹಾವುಗಳೊಂದಿಗೆ ಆಚರಿಸಲು ಇಷ್ಟಪಡುತ್ತಾರೆ. ಆದರೆ ಹಾಗೆ ಮಾಡುವುದರಿಂದ ಹಾವುಗಳಿಗೆ ಹಿಂಸೆಯಾಗುತ್ತದೆ. ಪುಂಡ-ಪುಡಾರಿಗಳು ತಮ್ಮ ವ್ಯಕ್ತಿತ್ವವನ್ನು hologramನಲ್ಲಿ ಬಿಂಬಿಸಿಕೊಳ್ಳುವಂತೆ ಹಾವುಗಳ hologram ಮಾಡಿ ಕುಂಕುಮ ಹಾಲು ಉಪಯೋಗಿಸಿ ಪೂಜಿಸಬಹುದೇನೊ!




ಮೂಲ ಲೇಖನ : ರೋಮುಲುಸ್ ವಿಟೇಕರ್

ಕನ್ನಡಕ್ಕೆ ಅನುವಾದ: ಡಾ. ದೀಪಕ್ .ಬಿ



## ವಿ. ವಿ. ಅಂಕಣ

# ಜೇಡಗಳೂ ಹಾರುತ್ತವೆ!

“ಬೇಗ ಬೇಗ ಹೆಜ್ಜೆ ಹಾಕಿ, ವಾಪಸ್ ಬರಲು ತಡವಾಗುತ್ತೆ”. ಎಂದು ಹೇಳಿಕೊಂಡೆ ನಮ್ಮ ಆಶ್ರಮದ ಪಕ್ಕದಲ್ಲಿರುವ ದೊಡ್ಡ ಬೆಟ್ಟದ ಚಾರಣಕ್ಕೆಂದು ನಾನು ಮತ್ತು ನನ್ನ ಸ್ನೇಹಿತರು ಹೊರಟೆವು. ಬೇಗ ಹೋಗಿ ಬರಬೇಕೆಂದು ಗಟ್ಟಿ ನಿರ್ಧಾರ ಮನಸಿನಲ್ಲಿ ಮಾಡಿದ್ದರೂ ದಾರಿಯಲ್ಲಿ ಸಿಗುವ ಹೊಸ ಹೊಸ ಸಂಗತಿಗಳನ್ನು ಕಾಣುವಾಗ, ಸುಮ್ಮನೇ ಹೋಗಲಾಗಲಿಲ್ಲ. ಹೊಸದಾಗಿ ಅರಳಿದ ಹೂ, ಹಾಡುವ ಹಕ್ಕಿ, ಜಿಗಿಯುವ ಜೇಡ ಹೀಗೆ ಎಲ್ಲವೂ ಹೊಸದೆನಿಸುತ್ತಿತ್ತು. ಓಹ್..! ಜೇಡ ಎಂದಾಗ ನೆನಪಾಯಿತು. ಇದುವರೆಗೆ ನಾನು ಎಷ್ಟೋ ಬಗೆಯ ಜೇಡಗಳ ಕಂಡಿದ್ದರೂ ಸರಿಯಾಗಿ ಗಮನಿಸಿರಲಿಲ್ಲ. ಉದಾಹರಣೆಗೆ ಜಿಗಿಯುವ ಜೇಡವನ್ನೇ ತೆಗೆದುಕೊಳ್ಳಿ, ಈ ಜೇಡ ಬೇರೆ ಹಲವು ಜೇಡಗಳಂತೆ ನಡೆಯದೇ ಮುಂದೆ ಮುಂದೆ ಸಾಗಲು ಅಥವಾ ಬೇಟೆಯಾಡಲು ಜಿಗಿಯುತ್ತದೆ. ಆದ್ದರಿಂದಲೇ ಅದಕ್ಕೆ ಜಿಗಿಯುವ ಜೇಡ(jumping spider)ಎಂದು ಕರೆಯುತ್ತಾರೆಂದರೆ ತಪ್ಪಾಗಲಾರದು. ಈ ವಿಷಯ ಅದರ ಹೆಸರಿನಲ್ಲೇ ಇದ್ದರೂ ಅದನ್ನು ಹೊರಗೆ ಸರಿಯಾಗಿ ಗಮನಿಸಿರಲಿಲ್ಲ. ಈ ಚಾರಣದ ಸಮಯದಲ್ಲಿ ಬೇಡವೆಂದರೂ ಈ ದೃಶ್ಯ ಕಣ್ಣಿಗೆ ಬೀಳುತ್ತಿತ್ತು.





ನಮ್ಮಲ್ಲಿ ಕೆಲವರು ಜೇಡಗಳನ್ನು ಕೇವಲ ಮನೆಯ ಬಾಗಿಲು ಸಂದಿಗಳಲ್ಲಿ ಅಥವಾ ಗೋಡೆಯ ಅಂಚಿನಲ್ಲಿ ಕಂಡಿದ್ದಾರೆ. ಈ ಜೇಡಗಳೆಷ್ಟು ಸೋಂಬೇರಿಗಳು! ಒಮ್ಮೆ ಬಲೆ ಎಳೆದು ಕೂತುಬಿಟ್ಟರೆ ಬೇಟೆ(ಕೀಟಗಳು) ಮನೆ ಬಾಗಿಲಿಗೆ ಬಂದು ಕದ ತಟ್ಟುವ ತನಕ ಹಾಗೆಯೇ ಕೂತಿರುತ್ತವೆ, ಎಂಬ ಭಾವನೆ ಇರುತ್ತದೆ. ಆದರೆ ಅವುಗಳನ್ನು ನಮ್ಮ ಅರಿವಿಗೆ ತಕ್ಕಂತೆ ಅಳೆಯುವುದು ಸರಿಯಲ್ಲ. ಕೀಟ ಪ್ರಪಂಚದಲ್ಲಿ ಜೇಡ ಒಂದು ವಿಭಿನ್ನ ಜೀವಿ. ಜೇಡ ದಾರಿಯ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಬಲೆಯನ್ನು ಒಂದೇ ರಾತ್ರಿಯಲ್ಲಿ ಹೆಣೆದು ಆಹಾರಕ್ಕಾಗಿ ಕಾಯುತ್ತಾ ಕುಳಿತಿರುವುದನ್ನು ಕೆಲವೊಮ್ಮೆ ನೀವೂ ಗಮನಿಸಬಹುದು. ಆದರೆ ಎಲ್ಲಾ ಜೇಡಗಳು ಹೀಗೆಯೇ ಇರುವುದಿಲ್ಲ. ಕೆಲವು ಜೇಡಗಳು ತಮ್ಮ ಆಹಾರವನ್ನು ಜಿಗಿದು ಬೇಟೆಯಾಡಿಯೂ ಸಂಪಾದಿಸುತ್ತದೆ. ಹರಿಯುವ ನೀರಿನ ಮೇಲೆ ಬಲೆ ಹೆಣೆದು ಹೊಂಚು ಹಾಕಿ ಬೇಟೆಯಾಡುತ್ತದೆ. ಜಿಗಿಯುತ್ತವೆ, ಕುಣಿಯುತ್ತವೆ, ಹಾರುತ್ತವೆ. ಒಟ್ಟಾರೆ ಹೇಳುವುದಾದರೆ ಜೇಡದ ಬಗ್ಗೆ ನಮಗಿರುವ ಜ್ಞಾನ ಕಡಿಮೆಯೇ. ಅರೆ... ಒಂದು ನಿಮಿಷ ತಾಳಿ, ಜೇಡದ ಬಗ್ಗೆ ಹೊಗಳುತ್ತಾ ಮೈಮರೆತು ಜೇಡಗಳು ಹಾರುತ್ತವೆ ಎಂದುಬಿಟ್ಟೆನಾ? ಹೌದು ಹೇಳಿದ ಹಾಗೆ ತೋರುತ್ತದೆ. ತಪ್ಪೇನಿಲ್ಲ ಬಿಡಿ ಈ ಮಾಸದ ವಿ ವಿ ಅಂಕಣದ ಹೊಸ ಸಂಶೋಧನೆಯ ಅನಾವರಣದಲ್ಲಿ ಈ ವಿಷಯವೇ ಇದೆ.

ಹೌದು ಜೇಡಗಳಿಗೆ ರೆಕ್ಕೆಯಿಲ್ಲದಿದ್ದರೂ ಅವು ಹೊಸ ಜಾಗವನ್ನು ಸೇರಲು ಸಾಗರಗಳ ದಾಟಿ ಕಿಲೋಮೀಟರುಗಟ್ಟಲೆ ಹಾರುತ್ತವೆ! ಹಾಗೆಂದು ಪಕ್ಷಿಯ ಹಾಗೆ ಹಾರುತ್ತದೆ ಎಂದೇನಲ್ಲ. ಹಾರುವ ಹಲ್ಲಿ ಕೇಳಿದ್ದೀರಲ್ಲವೇ, ಹಾಗೆ ಗಾಳಿಯಲ್ಲಿ ತನ್ನ ವಿಶೇಷವಾದ ಅಂಗದಿಂದ ತೇಲಿ ಹೋಗುವುದು ಸಾಧ್ಯವಿದೆ. ಸತ್ಯವಾಗಿ ಹೇಳುತ್ತೇನೆ ಜೇಡವು ಹೀಗೆ ಹಾರಬಲ್ಲುದು ಎಂದು ನನಗೂ ಈ ಮುಂಚೆ ತಿಳಿದಿರಲಿಲ್ಲ. ಇಷ್ಟೇ ಎಂದುಕೊಂಡರೆ? ಇದಕ್ಕಿಂತ ಆಶ್ಚರ್ಯ ಸುದ್ದಿ ಇನ್ನೊಂದಿದೆ. ಅದೇನೆಂದರೆ ಈ ಹಾರುವ ಜೇಡಗಳು ಹಾರಲು ಕೇವಲ ಗಾಳಿಯ ಮೇಲೆ ಅವಲಂಬಿಸಿಲ್ಲ, ಅದರ ಜೊತೆಗೆ ವಿದ್ಯುತ್ ಕಾಂತ(electric charges)ಗಳ ಸಹಾಯವನ್ನೂ ಸಮನಾಗಿ ಪಡೆಯುತ್ತದಂತೆ.



ಅದು ಹೇಗೆ ಸಾಧ್ಯ? ಇದೆಲ್ಲ ನಿಮಗೆ ಹೇಗೆ ತಿಳಿಯಿತು?

ಈ ಪ್ರಶ್ನೆಗೆ ಉತ್ತರ ಸಿಗಬೇಕೆಂದರೆ, ಈ ಜೇಡವು ಹೇಗೆ ಹಾರುತ್ತದೆ/ತೇಲುತ್ತದೆ ಎಂಬುದನ್ನ ಮೊದಲು ತಿಳಿಯಬೇಕಾಗುತ್ತದೆ. ಜೇಡಗಳು ಸೂಕ್ತ ವಾತಾವರಣದ ಸಮಯವನ್ನು ನೋಡಿಕೊಂಡು ನೇರ ಹೋಗಿ ಎತ್ತರದ ಪ್ರದೇಶದಲ್ಲಿ ನಿಂತು ತನ್ನ

ಬ್ರಹ್ಮಾಸ್ತ್ರವಾದ ಜೇಡರ ಬಲೆಯನ್ನು ಸ್ರವಿಸುತ್ತದೆ. ಸರಿಯಾದ ವೇಗದಲ್ಲಿ ಗಾಳಿ ಬೀಸಿದೊಡನೆ ಆ ಬಲೆ ಪ್ಯಾರಾಚೂಟ್ ನಂತೆ ಹಿಗ್ಗಿ ಗಾಳಿಯಲ್ಲಿ ತೇಲುತ್ತದೆ. ನಂತರ ಗಾಳಿಯೇ ಜೇಡವನ್ನು ಹೊತ್ತು ಮುಂದೆ ಸಾಗುತ್ತದೆ. ಗಾಳಿಯ ವೇಗ ಪ್ರತೀ ಘಂಟೆಗೆ 11 ಕಿ.ಮೀ. ಕ್ಕಿಂತ ಕಡಿಮೆ ಇದ್ದರೆ ಅದು ಜೇಡಗಳ ಹಾರುವಿಕೆಗೆ ಸೂಕ್ತ ಸಮಯ ಎಂಬುದನ್ನು ಈಗಾಗಲೇ ವಿಜ್ಞಾನಿಗಳು ಕಂಡುಹಿಡಿದಿದ್ದಾರೆ.



ಅದೆಲ್ಲ ಸರಿ, ಆದರೆ ವಿದ್ಯುತ್ ಕಾಂತಕ್ಕೂ ಜೇಡಗಳ ಹಾರುವಿಕೆಗೂ ಸಂಬಂಧವೆಲ್ಲಿ ಹೇಳಿದಿರಿ?

ಅಲ್ಲಿಗೇ ಬರುತ್ತಿದ್ದೇನೆ... ಈ ಮೇಲೆ ಹೇಳಿದ ರೀತಿಯಲ್ಲಿ ಹಾರುವ ಜೇಡಗಳು ಸುಮಾರಿವೆ. ಅದರಲ್ಲಿ ಕೆಲವು ಜೇಡಗಳನ್ನು ತೇಲಿಸಲು ಈ ಮೃದು ಗಾಳಿ ಸಾಲದು ಎನ್ನುತ್ತಾರೆ ಇಂಗ್ಲೆಂಡಿನ ಬ್ರಿಸ್ಟೋಲ್ (**Bristol**) ವಿಶ್ವವಿದ್ಯಾಲಯದ ಇಂದ್ರಿಯ ತಜ್ಞೆ, ಎರಿಕ ಮೋರ್ಲೆ. ಅಷ್ಟೇ ಅಲ್ಲದೆ ಕೆಲವು ಬಾರಿ ಜೇಡ ಹಾರಲು ಬೇಕಾದ ವೇಗದಲ್ಲಿ ಗಾಳಿ ಬೀಸುತ್ತಿದ್ದರೂ ಒಂದೂ ಹಾರುವುದಿಲ್ಲ.

ಹಾಗಾದರೆ ಇದಕ್ಕೆ ಕಾರಣ ಬೇರೆಯೇ ಇರಬೇಕು. ಅಲ್ಲವೇ..?

ಹೌದು ನಿಮ್ಮ ಊಹೆ ಸರಿಯಾಗಿದೆ. ಇದಕ್ಕೆ ಕಾರಣ ಈ ವಿದ್ಯುತ್ ಕಾಂತಗಳೇ. ಅದು ಹೇಗೆಂದು ನೋಡೋಣ. ಭೂಮಿಯ ಸುತ್ತ ಆಯಸ್ಕಾಂತೀಯ ಕ್ಷೇತ್ರ (Magnetic field) ಇರುವಂತೆ ವಿದ್ಯುತ್ ಕ್ಷೇತ್ರ (Electric field)ವೂ ಉಂಟು. ಭೂಮಿಯ ಮೇಲೆ ವಿದ್ಯುತ್ ಕಾಂತಗಳುಳ್ಳ (electrically charged) ವಸ್ತುಗಳು ಬೇಕಾದಷ್ಟಿವೆ. ಉದಾಹರಣೆಗೆ ಗಿಡದ ಎಲೆ, ಮರದ ರೆಂಬೆ ಹೀಗೆ ಯಾವ ವಸ್ತುವಾದರೂ ಆಗಬಹುದು ಅವುಗಳ ಸುತ್ತ ವಿದ್ಯುತ್ ಕಾಂತಗಳು ಇರುತ್ತವೆ. ಹಾಗೆಯೇ ಈ ಕಾಂತಗಳ ಶಕ್ತಿ ಒಂದೊಂದು ವಸ್ತುವಿನ ಸುತ್ತಲೂ ಬೇರೆ ಬೇರೆಯಾಗಿರುತ್ತದೆ. ಇಂತಹ ವಸ್ತುಗಳನ್ನು ಭೂಮಿಯ ವಿದ್ಯುತ್ ಕಾಂತಗಳು ಆಕರ್ಷಿಸುತ್ತದೆ (attract) ಅಥವಾ ಹಿಮ್ಮೆಟ್ಟಿಸುತ್ತದೆ (repel). ಹಾಗಾದರೆ ಇದೇ ರೀತಿ ನಮ್ಮ ಈ ಹಾರುವ ಜೇಡದ ಬಲೆಗೂ ವಿದ್ಯುತ್ ಕಾಂತಗಳಿದ್ದು ಅವುಗಳೇ ಜೇಡರ ಬಲೆಯನ್ನು ಮೇಲಕ್ಕೆ ಎತ್ತಿ ತೇಲಿಸಿರಬಹುದಲ್ಲವೇ? ಎಂಬ ಗುಮಾನಿ ಮೋರ್ಲೆಯ್ ಮತ್ತು ರಾಬರ್ಟ್ ತಲೆಯಲ್ಲಿ ಹೊಕ್ಕಿತು. ಇವರಿಬ್ಬರೂ ಬ್ರಿಸ್ಟೋಲ್ ವಿಶ್ವವಿದ್ಯಾಲಯದವರೇ.



ತಮ್ಮ ಅನುಮಾನವನ್ನು ಬಗೆ ಹರಿಸಿಕೊಳ್ಳಲು ಅವರು ಒಂದು ಪ್ರಯೋಗವನ್ನೂ ಮಾಡಿಯೇಬಿಟ್ಟರು. ಅದಕ್ಕಾಗಿ ಮೊದಲು ಅವರ ಪ್ರಯೋಗಾಲಯದಲ್ಲಿ ಇದ್ದಂತಹ ಸ್ವಭಾವಿಕವಾದ ವಿದ್ಯುತ್ ಕಾಂತವನ್ನು ನಿರ್ಬಂಧಿಸಿದರು. ನಂತರ ಕೃತಕ ವಿದ್ಯುತ್ ಕಾಂತಗಳನ್ನು ಲಿನಿಫಿಡೆ(Linyphiidae) ಎಂಬ ವರ್ಗದ ಜೇಡಗಳ ಮೇಲೆ ಪ್ರಯೋಗಿಸಿದರು. ಈ ಕಾಂತಗಳು ಜೇಡಗಳಿಗೆ ತಗುಲಿದ ತಕ್ಷಣ ಜೇಡಗಳು ಮೇಲೆ ಹಾರಲು ಬ್ಯಾಲ್ಲೇರಿನ ನೃತ್ಯದಲ್ಲಿ ನಿಲ್ಲುವಂತೆ ತುದಿಗಾಲಲ್ಲಿ ನಿಂತು ಸಿದ್ಧವಾದವು. ಹಾಗೆಯೇ ಈ ಕಾಂತಗಳನ್ನು ತೆಗೆದಾಗ ಮರಳಿ ಯಥಾಸ್ಥಿತಿಗೆ ಬಂದವು.




ಇದೇ ಪ್ರಯೋಗವನ್ನೂ ಮಾಡಿ ಎಲಕ್ಟ್ರಾನ್ ಸೂಕ್ಷ್ಮದರ್ಶಕದಲ್ಲಿ ಜೇಡವನ್ನು ಗಮನಿಸಿದಾಗ ಜೇಡದ ಕಾಲುಗಳ ಮೇಲಿರುವ ಸೂಕ್ಷ್ಮ ರೋಮಗಳು ಗಾಳಿಗೆ ಹಾಗೂ ವಿದ್ಯುತ್ ಕಾಂತಗಳಿಗೆ ಪ್ರತಿಕ್ರಿಯಿಸುತ್ತಿರುವುದು ಕಂಡು ಬಂದಿತು. ಆದರೆ ಈ ಪ್ರತಿಕ್ರಿಯೆ ಎರಡಕ್ಕೂ ಒಂದೇ ರೀತಿಯಲ್ಲಿ ಇರದೇ, ಮೊದಲು ಗಾಳಿ ಬೀಸಿದಾಗ ರೋಮಗಳು ಸ್ವಲ್ಪ ತಡವಾಗಿ ನೆಟ್ಟಗಾದವು. ಆದರೆ ವಿದ್ಯುತ್ ಕಾಂತಕ್ಕೆ ತಟ್ಟೆಂದು ಎದ್ದು ನಿಂತಿತು. ಹಾಗೂ ಕಾಂತಗಳನ್ನು ತೆಗೆದ 30 ಸೆಕೆಂಡುಗಳಿಗೆ ರೋಮಗಳು ಮೊದಲ ಸ್ಥಿತಿಗೆ ಬಂದವು. ಇದೊಂದು ದೊಡ್ಡ ಆವಿಷ್ಕಾರ. ಬಹುಶಃ ಈ ಕಾರಣಗಳಿಂದಲೇ ಕೆಲವು ಜೇಡಗಳು ಹಾರುತ್ತಿವೆ ಎಂಬ ಸ್ವಲ್ಪ ಗಟ್ಟಿ ನಂಬಿಕೆ ಮೂಡಿದರೂ...

ಇಷ್ಟಕ್ಕೆ ನಾವು ಜೇಡಗಳು ಗಾಳಿಯಲ್ಲಿ ಹಾರಲು ಇವೇ ಕಾರಣವೆಂದು ಹೇಳಲಾಗದು. ಜೇಡಗಳು ಹಾರಲು ತುದಿಗಾಲಲಿದ್ದರೆ ಸಾಕೇ? ಅದನ್ನು ಮೇಲಕ್ಕೆ ಹಾರಿಸಲು ಬೇರೇನೋ ಕಾರಣವಿದೆ ಎನ್ನುತ್ತಾರೆ ಬರ್ಲಿನ್ ವಿಶ್ವವಿದ್ಯಾಲಯದ ಮೂನ್ಸುಂಗ್ ಚೊ. ಜೊತೆಗೆ ಇದನ್ನು ತಿಳಿಯಲು ಇನ್ನೂ ಹೆಚ್ಚು ಸಮಯ - ಸಂಶೋಧನೆಯ ಅವಶ್ಯಕತೆಯಿದೆ ಎಂದು ಕಾಣುತ್ತದೆ!



ಅದೇನೇ ಇರಲಿ, ನಮ್ಮ ಈ ಪುಟ್ಟ ಪುಟ್ಟ ಸಂಶೋಧನೆಗಳಿಂದ ನಿಸರ್ಗದ ನಿಗೂಢತೆಯ ಪುಸ್ತಕವನ್ನೆಲ್ಲಾ ಓದುತ್ತೇನೆಂಬ ಭ್ರಮೆಯನ್ನು ಬಿಟ್ಟು, ಅವಳು ತೆರೆದು ಕೊಡುವ ಒಂದೊಂದೇ ಪುಟವನ್ನು ಓದುತ್ತೇನೆ ಎನ್ನುವುದರಲ್ಲೇ ಹೆಚ್ಚು ನೆಮ್ಮದಿಯಿದೆ ಎಂದು ನನಗನಿಸುತ್ತದೆ.


- ಜೈ ಕುಮಾರ್ .ಆರ್

WCG, ಬೆಂಗಳೂರು




ScienceNews for Students

# ವಿಸ್ಮಯ–ಜಗತ್ತು



ಸ್ವಚ್ಛತೆ ಸಂರಕ್ಷಣೆ
ಸಮತೋಲನೆಯ ಸಂಕಲ್ಪ ಒಂದೆಡೆ
ಬರಡು ವಿನಾಶ
ಮಾಲಿನ್ಯ ಓಜೋನ್ ಪರಿಣಾಮ ಮತ್ತೊಂದೆಡೆ

ಸೌರ ವಾಯು ಜಲ ಶಕ್ತಿಗಳ ಬಳಕೆ
ಅದಿರು ಸಸ್ಯ ಸಾಗರ ಸಂಪನ್ಮೂಲಗಳ ಬಳಕೆ ಒಂದೆಡೆ
ವಿಶ್ವ ನೆಲಜಲ ವಾಯು ದಿನಗಳ ಆಚರಣೆ
ಮಿಸಲಿಡುವಿಕೆ ಮತ್ತು ಕಾನೂನು ಕಟ್ಟಡಗಳು ಮತ್ತೊಂದೆಡೆ

ಹಸಿವು ಬಡತನ ದಾರಿದ್ರ್ಯ
ನಿರ್ಮೂಲನೆಯ ಕೂಗು ಒಂದೆಡೆ
ಆಹಾರ ಪೋಲಿನಿಂದಲೇ 1/3 ರಷ್ಟು
ಹಸಿರುಮನೆ ಮಾಲಿನ್ಯ ಮತ್ತೊಂದೆಡೆ

ಜಾಗತೀಕರಣ ಆಧುನೀಕರಣ
ಕೈಗಾರಿಕರಣ ನಗರೀಕರಣ ಒಂದೆಡೆ
ಜಾಗತಿಕ ತಾಪಮಾನ ಹವಾಮಾನ ಬದಲಾವಣೆ
ಅಂತರ್ಜಲ ಕುಸಿತ ಮಾಲಿನ್ಯದ ಪರಿಣಾಮ ಮತ್ತೊಂದೆಡೆ

ಆರ್ಥಿಕತೆ  ವ್ಯಾಪಾರೀಕರಣ
ಉದ್ಯೋಗಿಕರಣ ನಗರೀಕರಣ ಒಂದೆಡೆ
ಮಾಲಿನ್ಯಕೆ ಅಭಿವೃದ್ಧಿಯ ಮಂತ್ರ
ವಿನಾಶದ ಅಂಚಿಗೆ ಪರಿಹಾರ ಧನ ಮತ್ತೊಂದೆಡೆ

- ಕೃಷ್ಣನಾಯಕ್
ರಾಮನಗರ ಜಿಲ್ಲೆ

# ಪ್ರಕೃತಿ ಬಿಂಬ



**Gardon orb weaver spider** © ಡಾ.ದೀಪಕ್ ಬಿ.

ಜೇಡಗಳೆಂದರೆ ಭಯ ಪಡುವವರೇ ಹೆಚ್ಚು. ಆದರೆ ಈ ಸುಂದರ ಜೀವಿಗಳ ಜೀವನವನ್ನು ಹತ್ತಿರದಿಂದ ಗಮನಿಸಿದರೆ ತಿಳಿಯುತ್ತದೆ ಇವುಗಳ ಮಹತ್ವ. ಕುರುಚಲು ಪ್ರದೇಶಗಳ ಬಳಿ ಸಂಜೆ ವೇಳೆಗೆ ನೆಲಮಟ್ಟದಲ್ಲಿ ಬಲೆ ಕಟ್ಟುವ ಕೆಲಸಕ್ಕೆ ನಿಲ್ಲುವ ಈ ಜೇಡ ದುಂಡನೆಯ ವೃತ್ತಗಳುಳ್ಳ ಬಲೆಯನ್ನು ನಿಮಿಷಗಳಲ್ಲಿ ನಿರ್ಮಿಸಿ ಬಲೆಯ ಮಧ್ಯದಲ್ಲಿ ಬೇಟೆಯ ಬರುವಿಕೆಗಾಗಿ ಕಾದು ಕುಳಿತಿರುತ್ತದೆ. ಹಾರುವ ಸಣ್ಣ ಸಣ್ಣ ಕೀಟಗಳು ಬಲೆಗೆ ಬಿದ್ದರೆ ಚಕ್ಕನೆ ಹಿಡಿದು ತನ್ನ ದೇಹದಲ್ಲಿ ಸೂಸುವ ದಾರದ ಎಳೆಗಳಿಂದ ಸುತ್ತಿ ಬಂಧಿಸಿ ಬೇಟೆಯ ದೇಹಕ್ಕೆ ವಿಷವನ್ನು ಚುಚ್ಚುತ್ತದೆ. ಬಿಡುವಿನಲ್ಲಿ ತಿಂದು ಮುಗಿಸುತ್ತದೆ. ತಿಳಿ ಹಸಿರು ಕಾಲುಗಳುಳ್ಳ ಈ ಸುಂದರ ಜೇಡ ಬೆಳಗಾಗುತ್ತಿದ್ದಂತೆ, ಬೇಟೆ ಮುಗಿಸಿ ಸುರಕ್ಷಿತ ಸ್ಥಳದಲ್ಲಿ ಕುಳಿತುಕೊಳ್ಳುತ್ತದೆ. ಬಹಳ ನಾಚಿಕೆ ಸ್ವಭಾವದ ಈ ಜೇಡ ತನಗೆ ಅಪಾಯ ಬಂದಾಗ ರೆಂಬೆಯ ಮೇಲಿಂದಲೇ ರೊಯ್ಯನೆ ನೆಲಕ್ಕೆ ನೇರ ಜಿಗಿದು ಕಣ್ಮರೆಯಾಗುತ್ತದೆ.



**Signature Spider** © ಡಾ.ದೀಪಕ್ ಬಿ.

ಸಣ್ಣ ಸಣ್ಣ ಪೊದೆಗಳ ಬಳಿ ನೆಲಮಟ್ಟದಿಂದ ಮೂರ್ನಾಲ್ಕು ಅಡಿ ಎತ್ತರದಲ್ಲಿ ಬಿಳಿಬಣ್ಣದ X ಆಕಾರದ ಗುರುತನ್ನು ನೀವು ಕಂಡಿರಬಹುದು. ಇದು ಯಾರೋ ಬರೆದ ಗುಣಕಾರದ ಚಿನ್ಹೆ ಅಲ್ಲ. ಇದು 20mm ಉದ್ದ ಉಳ್ಳ ಸಹಿ ಜೇಡದ ಕೆಲಸ. ಪೊದೆಗಳ ಬಳಿ ದುಂಡನೆಯ ಬಲೆ ನಿರ್ಮಿಸುವ ಈ ಜೇಡ ಬಲೆಯ ಮಧ್ಯೆದಲ್ಲಿ ಖಾಲಿ ಬಿಟ್ಟಿರುತ್ತದೆ. ಕೆಲವೆ ಎಳೆಗಳನ್ನು ಬಂಧಿಸಿ ಉಂಟಾದ ಬಲೆಯ ಮಧ್ಯಭಾಗದಲ್ಲಿ ಜೇಡ ಕುಳಿತುಕೊಳ್ಳುತ್ತದೆ. ಬಲಿಷ್ಟವಾದ ಕಪ್ಪು ಕಾಲುಗಳುಳ್ಳ ಈ ಸಹಿ ಜೇಡದ ದೇಹವು ಹಳದಿ ಬಣ್ಣಕ್ಕೆ ಇರುತ್ತದೆ. ಗಂಡು ಜೇಡವೂ ಹೆಣ್ಣು ಜೇಡಕಿಂತ ಚಿಕ್ಕವು. ಬಲೆಯ ಮಧ್ಯದಲ್ಲಿ ಬಿಳಿ ಎಳೆಗಳಿಂದ X ಆಕಾರಕ್ಕೆ ಗುರುತು ಮಾಡುತ್ತದೆ. ಈ ಜೇಡದ ಆಹಾರವಾದ ಕೀಟಗಳನ್ನು ಬಲೆಯ ಕಡೆಗೆ ಆಕರ್ಷಿಸಲು ಮತ್ತು ಸಿಹಿ ಜೇಡವನ್ನು ಹಿಡಿದು ತಿನ್ನುವ ಪಕ್ಷಿಗಳನ್ನು ಎದುರಿಸಿ ತಪ್ಪಿಸಿಕೊಳ್ಳಲು X ಆಕಾರವನ್ನು ಬಳಸುತ್ತದೆ. ಈ ಸುಂದರ ಬಲೆಯನ್ನು ನೋಡುವುದೇ ಚೆಂದ.

**ಛಾಯಾಚಿತ್ರಗಳು :** ಡಾ. ದೀಪಕ್ ಬಿ. ಮೈಸೂರು

**ಲೇಖನ :** ಶಂಕರಪ್ಪ .ಕೆ .ಪಿ